**ಕರ್ನಾಟಕ ವಿಧಾನ ಪರಿಷತ್ತು**

ಮಾನ್ಯ ವಿಧಾನ ಪರಿಷತ್ತ ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ : 08

ಉತ್ತರಿಸಬೇಕಾದ ದಿನಾಂಕ : 14.09.2021

ಉತ್ತರಿಸಬೇಕಾದವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಉತ್ತರ ಕರ್ನಾಟಕ ಭಾಗದಲ್ಲಿ ದೇವದಾಸಿ ಪದ್ಧತಿಯು ಜಾರಿಯಲ್ಲಿದ್ದು, ಸದರಿ ಪದ್ಧತಿಯ ನಿಯಂತ್ರಣಕ್ಕೆ ಸರಕಾರವು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರೂ ಸಹ ಈ ಪದ್ಧತಿಯನ್ನು ಸಂಪೂರ್ಣವಾಗಿ ಮೂಲೋತ್ಪಾಟನ ಮಾಡಲು ಸಾಧ್ಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ರಾಜ್ಯದ ಉತ್ತರ ಕರ್ನಾಟಕ ಭಾಗದಲ್ಲಿ ದೇವದಾಸಿ ಪದ್ಧತಿಯು ಜಾರಿಯಲ್ಲಿದ್ದ ಕಾರಣ ಸರ್ಕಾರವು 1993-94 ರಲ್ಲಿ ಹಾಗೂ 2007-08 ನೇ ಸಾಲಿನಲ್ಲಿ ದೇವದಾಸಿಯರ ಸಮೀಕ್ಷೆಯನ್ನು ನಡೆಸಲಾಗಿರುತ್ತದೆ. ಈ ಸಮೀಕ್ಷೆಯಲ್ಲಿ ರಾಜ್ಯದ 14 ಜಿಲ್ಲೆಗಳಲ್ಲಿ (ಬೆಳಗಾವಿ, ಧಾರವಾಡ, ಗದಗ, ಹಾವೇರಿ, ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ವಿಜಯಪುರ, ಬಾಗಲಕೋಟೆ, ಬಳ್ಳಾರಿ, ಕೊಪ್ಪಳ, ರಾಯಚೂರು, ಯಾದಗಿರಿ ಮತ್ತು ಕಲಬುರಗಿ) 46,660 ಮಾಜಿ ದೇವದಾಸಿಯರು ಇರುವುದಾಗಿ ಕಂಡುಬಂದಿರುತ್ತದೆ.<br>ರಾಜ್ಯದ 14 ಜಿಲ್ಲೆಗಳಲ್ಲಿ ದೇವದಾಸಿ ಪದ್ಧತಿಯ ನಿಯಂತ್ರಣಕ್ಕೆ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ದೇವದಾಸಿ ಪುನರ್ವಸತಿ ಯೋಜನೆಯ ಕಛೇರಿಗಳನ್ನು ತೆರೆಯಲಾಗಿರುತ್ತದೆ. 14 ಜಿಲ್ಲೆಗಳ ಉಪ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರು ದೇವದಾಸಿ ಪದ್ಧತಿ ಸಮರ್ಪಣಾ ನಿಷೇಧ ಅಧಿಕಾರಿಗಳಾಗಿ, ಹಾಗೂ ಯೋಜನಾಧಿಕಾರಿಗಳು- ದೇವದಾಸಿ ಪುನರ್ವಸತಿ ಯೋಜನೆ ಇವರಿಂದ ಪರಿಣಾಮಕಾರಿಯಗಿ ಕಾರ್ಯನಿರ್ವಹಿಸಲಾಗುತ್ತಿದೆ. |
| ಆ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಎಷ್ಟು ಬಾಲಕಿಯರು/ ಮಹಿಳೆಯರು ದೇವದಾಸಿ ಪದ್ಧತಿಗೆ ಒಳಗಾಗಿದ್ದಾರೆ: (ಜಿಲ್ಲಾವಾರು ಮಾಹಿತಿ ನೀಡುವುದು) | (see table below) |

| ಕ್ರ.ಸಂ | ಜಿಲ್ಲೆಯ ಹೆಸರು | ಪ್ರಕರಣಗಳ ಸಂಖ್ಯೆ |
|---|---|---|
| 1 | ಕೊಪ್ಪಳ | 02(ಕೊಪ್ಪಳ ಜಿಲ್ಲೆಯಲ್ಲಿ 2 ಪ್ರಕರಣಗಳು ನಡೆದಿದ್ದು, ಸದರಿಯವರನ್ನು ರಕ್ಷಣೆ ಮಾಡಲಾಗಿದೆ. ಪ್ರಕರಣ ವನ್ನು ನ್ಯಾಯಾಲಯದಲ್ಲಿ ದಾಖಲಿಸಲಾಗಿದೆ. |
| 2 | ಚಿತ್ರದುರ್ಗ | 0 |
| 3 | ರಾಯಚೂರು | 0 |
| 4 | ಗದಗ | 0 |
| 5 | ಧಾರವಾಡ | 0 |
| 6 | ಯಾದಗಿರಿ | 0 |
| 7 | ಕಲಬುರಗಿ | 0 |
| 8 | ಶಿವಮೊಗ್ಗ | 0 |
| 9 | ದಾವಣಗೆರೆ | 0 |
| 10 | ಬಾಗಲಕೋಟೆ | 0 |
| 11 | ಬಳ್ಳಾರಿ | 0 |
| 12 | ಹಾವೇರಿ | 0 |
| 13 | ವಿಜಯಪುರ | 0 |
| 14 | ಬೆಳಗಾವಿ | 0 |

| | | |
|---|---|---|
| ಇ) | ದೇವದಾಸಿ ಪದ್ಧತಿಯನ್ನು ತಡೆಗಟ್ಟಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ: | ದೇವದಾಸಿ ಪದ್ಧತಿಯನ್ನು ತಡೆಗಟ್ಟಲು ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ ಕಾಯ್ದೆ) 1982 ಹಾಗೂ ತಿದ್ದುಪಡಿ ಅಧಿನಿಯಾಮ 2009ರ ಪ್ರಕಾರ ಯಾವುದೇ ಹೆಣ್ಣು ಮಕ್ಕಳಿಗೆ / ಮಹಿಳೆಯರನ್ನು ದೇವದಾಸಿಯನ್ನಾಗಿ ಸಮರ್ಪಣಾ ಮಾಡುವುದು ಅಪರಾಧವಾಗಿದೆ. ದೇವದಾಸಿ ಪದ್ಧತಿ ಆಚರಿಸುವ, ಅನುಮತಿ ನೀಡುವ, ಆಚರಣೆಯಲ್ಲಿ ಬಾಗವಹಿಸುವ, ಪ್ರೋತ್ಸಾಹಿಸುವ, ಕುಮ್ಮಕ್ಕು ನೀಡುವವರಿಗೆ 3 ವರ್ಷಗಳ ಜೈಲು ಶಿಕ್ಷೆ ಮತ್ತು ರೂ.2,000/-ಗಳ ದಂಡ. ಸಮರ್ಪಣೆಗೆ ಪ್ರಚೋದಿಸುವ ಪೋಷಕರು / ಪಾಲಕರು ಅಥವಾ ಅವರ ಸಂಬಂಧಿಕರಿಗೆ 5 ವರ್ಷಗಳ ಕಾರಾಗೃಹ ವಾಸ, ಕನಿಷ್ಠ 2 ವರ್ಷಗಳಿಗೆ ಕಡಿಮೆ ಇಲ್ಲದಂತೆ ಹಾಗೂ ಗರಿಷ್ಠ ರೂ.5,000/- ಗಳ ಕನಿಷ್ಠ ರೂ.2,000/-ಗಳಿಗೆ ಕಡಿಮೆ ಇಲ್ಲದಂತೆ ದಂಡ ವಿಧಿಸಲಾಗುವುದು.<br><br>ದೇವದಾಸಿ ನಿಷೇಧ ಕಾಯ್ದೆ ಬಗ್ಗೆ ಬೀದಿ ನಾಟಕ, ಜಾತ್ರಾಜಾಗೃತಿ ಶಿಬಿರಗಳು, ಗೋಡೆ ಬರಹ, ಕರಪತ್ರ ಹಂಚುವಿಕೆ ಮತ್ತು ರ್‍ಯಾಲಿಗಳನ್ನು ಹಮ್ಮಿಕೊಳ್ಳುವುದರ ಮೂಲಕ ವ್ಯಾಪಕ ಪ್ರಚಾರ ನೀಡಲಾಗುತ್ತಿದೆ. ಜಿಲ್ಲಾಡಳಿತ ಹಾಗೂ ಪೋಲಿಸ್ ಇಲಾಖೆ ಸಹಕಾರದೊಂದಿಗೆ ಈ ಆಚರಣೆ ಮಾಡದಂತೆ ಜಾಗೃತಿ ಮೂಡಿಸಲಾಗುತ್ತಿದೆ. |
| ಈ) | ದೇವದಾಸಿ ಪದ್ಧತಿ ತಡೆಗಟ್ಟಲು ಸರ್ಕಾರೇತರ ಸಂಸ್ಥೆಗಳು ಶ್ರಮಿಸುತ್ತಿದ್ದು, ಸದರಿ ಪ್ರಯತ್ನಕ್ಕೆ ಸರ್ಕಾರದ ಬೆಂಬಲವೇನು: | ಸರ್ಕಾರೇತರ ಸಂಸ್ಥೆಗಳು ಹಾಗೂ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ಪರಸ್ಪರ ಸಹಯೋಗದೊಂದಿಗೆ ಜಿಲ್ಲಾ ಮಟ್ಟದಲ್ಲಿ ಕೈಗೊಳ್ಳುವ ಜಾತ್ರಜಾಗೃತಿ, ಬೀದಿ ನಾಟಕ, ಕಾನೂನು ಶಿಬಿರ ಮತ್ತು ಆರೋಗ್ಯ ಶಿಬಿರಗಳನ್ನು ಪರಿಣಾಮಕಾರಿಯಾಗಿ ನಡೆಸಲಾಗುತ್ತಿದೆ ಮತ್ತು ಸಮುದಾಯದಲ್ಲಿ ಅರಿವನ್ನು ಮೂಡಿಸಲಾಗುತ್ತಿದೆ. |
| ಉ) | ದೇವದಾಸಿ ಪದ್ಧತಿ ತಡೆಗಟ್ಟಲು ಮತ್ತು ದೇವದಾಸಿಯರ ಪುನರ್ವಸತಿಗಾಗಿ ನೂತನ ಕಾನೂನು ರಚನೆ ಮಾಡುವ ಬಗ್ಗೆ ಸರ್ಕಾರದ ಪ್ರಯತ್ನವೇನು? | ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) ಅಧಿನಿಯಮ 1982 ಅನ್ನು ಜಾರಿಗೆ ತಂದಿರುತ್ತದೆ. 1982ನೇ ಅಧಿನಿಯಮಕ್ಕೆ ತಿದ್ದುಪಡಿಮಾಡಿ ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) (ತಿದ್ದುಪಡಿ) ವಿಧೇಯಕ 2009 ಅನ್ನು ಜಾರಿಗೆ ತಂದಿರುತ್ತದೆ. |

**ಸಂಖ್ಯೆ: ಮಮಇ/75/ಮಅನಿ 2021**

Halappa B A

**(ಹಾಲಪ್ಪ ಬಸಪ್ಪ ಆಚಾರ್)**

ಗಣಿ, ಮತ್ತು ಭೂವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.